ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 710
ಸದಸ್ಯರ ಹೆಸರು : ಶ್ರೀ ಲಹರ್ ಸಿಂಗ್ ಸಿರೋಯಾ
ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು
ಉತ್ತರಿಸಬೇಕಾದ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಬಾಲ್ಯ ವಿವಾಹಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಜ್ಯದಲ್ಲಿ ಬಾಲ್ಯವಿವಾಹಗಳು ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ರಾಜ್ಯದಲ್ಲಿ ಲಾಕ್‌ಡೌನ್ ಅವಧಿಯಲ್ಲಿ 2020ರ ಮಾರ್ಚನಿಂದ ಎಷ್ಟು ಬಾಲ್ಯ ವಿವಾಹಗಳು ನಡೆದಿವೆ: (ಜಿಲ್ಲಾವಾರು ಮಾಹಿತಿ ನೀಡುವುದು) | ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಇ | ಈ ಸಂಬಂಧ ಎಷ್ಟು ದೂರುಗಳು ದಾಖಲಾಗಿವೆ; ಎಷ್ಟು ಪ್ರಕರಣಗಳು ಇತ್ಯರ್ಥವಾಗಿರುತ್ತದೆ: (ಜಿಲ್ಲಾವಾರು ಮಾಹಿತಿ ನೀಡುವುದು) | ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಈ | ಬಾಲ್ಯ ವಿವಾಹ ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಅನುಬಂಧ-2ರಲ್ಲಿ ಲಗತ್ತಿಸಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 98 ಮಮಅ 2020

ಶ್ರೀ ಲಹರ್ ಸಿಂಗ್ ಸಿರೋಯಾ, ವಿಧಾನ ಪರಿಷತ್ತು ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ:710ಕ್ಕೆ ಅನುಬಂಧ-1

ಆ. ರಾಜ್ಯದಲ್ಲಿ ಲಾಕ್‌ಡೌನ್ ಅವಧಿಯಲ್ಲಿ 2020ರ ಮಾರ್ಚನಿಂದ ಎಷ್ಟು ಬಾಲ್ಯ ವಿವಾಹಗಳು ನಡೆದಿವೆ;
ಇ. ಈ ಸಂಬಂಧ ಎಷ್ಟು ದೂರುಗಳು ದಾಖಲಾಗಿವೆ; ಎಷ್ಟು ಪ್ರಕರಣಗಳು ಇತ್ಯರ್ಥವಾಗಿರುತ್ತದೆ"
(ಜಿಲ್ಲಾವಾರು ಮಾಹಿತಿ ನೀಡುವುದು)

| ಕ್ರ.ಸಂ | ಜಿಲ್ಲೆಯ ಹೆಸರು | ಸ್ವೀಕರಿಸಿದ ದೂರುಗಳ ಸಂಖ್ಯೆ | ತಡೆದ ಸಂಖ್ಯೆ | ನಡೆದ ಸಂಖ್ಯೆ | ಎಫ್ ಐ ಆರ್ ಸಂಖ್ಯೆ |
|---|---|---|---|---|---|
| 1 | ಬಾಗಲಕೋಟೆ | 47 | 48 | 0 | 0 |
| 2 | ಬೆಂಗಳೂರು (ಗ್ರಾ) | 31 | 28 | 1 | 1 |
| 3 | ಬೆಂಗಳೂರು (ನ) | 17 | 13 | 4 | 5 |
| 4 | ಬೆಳಗಾವಿ | 120 | 117 | 12 | 4 |
| 5 | ಬಳ್ಳಾರಿ | 204 | 195 | 9 | 6 |
| 6 | ಬೀದರ್ | 45 | 49 | 1 | 1 |
| 7 | ವಿಜಯಪುರ | 75 | 77 | 0 | 0 |
| 8 | ಚಾಮರಾಜನಗರ | 30 | 29 | 1 | 1 |
| 9 | ಚಿಕ್ಕಬಳ್ಳಾಪುರ | 80 | 74 | 6 | 6 |
| 10 | ಚಿಕ್ಕಮಗಳೂರು | 44 | 35 | 7 | 3 |
| 11 | ಚಿತ್ರದುರ್ಗ | 88 | 92 | 0 | 0 |
| 12 | ದಕ್ಷಿಣ ಕನ್ನಡ | 5 | 7 | 1 | 1 |
| 13 | ದಾವಣಗೆರೆ | 49 | 48 | 1 | 0 |
| 14 | ಧಾರವಾಡ | 15 | 9 | 0 | 0 |
| 15 | ಗದಗ | 28 | 28 | 0 | 0 |
| 16 | ಕಲಬುರ್ಗಿ | 78 | 78 | 1 | 0 |
| 17 | ಹಾಸನ | 93 | 71 | 22 | 3 |
| 18 | ಹಾವೇರಿ | 41 | 29 | 0 | 0 |
| 19 | ಕೊಡಗು | 1 | 0 | 1 | 1 |
| 20 | ಕೋಲಾರ | 64 | 63 | 1 | 2 |
| 21 | ಕೊಪ್ಪಳ | 80 | 71 | 5 | 1 |
| 22 | ಮಂಡ್ಯ | 42 | 30 | 14 | 0 |
| 23 | ಮೈಸೂರು | 154 | 136 | 18 | 18 |
| 24 | ರಾಯಚೂರು | 29 | 27 | 0 | 0 |
| 25 | ರಾಮನಗರ | 68 | 62 | 9 | 4 |
| 26 | ಶಿವಮೊಗ್ಗ | 57 | 53 | 8 | 8 |
| 27 | ತುಮಕೂರು | 87 | 82 | 4 | 3 |
| 28 | ಉಡುಪಿ | 0 | 0 | 0 | 0 |
| 29 | ಉತ್ತರ ಕನ್ನಡ | 9 | 6 | 1 | 1 |
| 30 | ಯಾದಗಿರಿ | 59 | 56 | 0 | 0 |
| | **ಒಟ್ಟು** | **1740** | **1613** | **127** | **69** |

ಶ್ರೀ ಲಹರ್ ಸಿಂಗ್ ಸಿರೋಯಾ, ವಿಧಾನ ಪರಿಷತ್ತು ಸದಸ್ಯರು ಇವರ ಚುಕ್ಕೆ ಗುರುತಿಲ್ಲದ
ಪ್ರಶ್ನೆ ಸಂ:710ಕ್ಕೆ ಅನುಬಂಧ-2

- ಬಾಲ್ಯವಿವಾಹ ನಿಷೇಧ ಕಾಯ್ದೆ-20016ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:11154/2006 ರಲ್ಲಿ ನೀಡಿದ ನಿರ್ದೇಶನದಂತೆ ಕ್ರಿಯಾ ಯೋಜನೆಯನ್ನು ತಯಾರಿಸಲು ಸರ್ಕಾರವು ಭಾರತದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಮೂರ್ತಿಗಳಾದ ಜಸ್ಟೀಸ್ ಶಿವರಾಜ್.ವಿ. ಪಾಟೀಲ್ ಇವರ ಅಧ್ಯಕ್ಷತೆಯಲ್ಲಿ ಕೋರ್ ಕಮಿಟಿಯನ್ನು ರಚಿಸಿದ್ದು, ಸದರಿ ಕೋರ್ ಕಮಿಟಿಯು ದಿನಾಂಕ: 30.06.2011ರಂದು ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಸದರಿ ವರದಿಯಲ್ಲಿನ ಶಿಫಾರಸುಗಳನ್ವಯ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.
- ಬಾಲ್ಯವಿವಾಹ ನಿಷೇಧ ಕಾಯ್ದೆ-2006ನ್ನು ಪರಿಣಾಮಕಾರಿಯಾಗಿ ಅನುಷ್ಠನಾಗೊಳಿಸುವ ಸಂಬಂಧ ಸರ್ಕಾರದ ಆದೇಶ ಸಂಖ್ಯೆ: ಮಮಇ 501 ಎಸ್.ಜೆ.ಡಿ 2011 ದಿನಾಂಕ:16.11.2011ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯದಲ್ಲಿ ಉಸ್ತುವಾರಿ ಕೋಶವನ್ನು ಸ್ಥಾಪಿಸಲಾಗಿದೆ.
- ಬಾಲ್ಯವಿವಾಹ ನಿಷೇಧ ಅಧಿನಿಯಮ-2006ಕ್ಕೆ ತಿದ್ದುಪಡಿ ತರಲಾಗಿದ್ದು, ಬಾಲ್ಯವಿವಾಹ ನಿಷೇಧ ಕರ್ನಾಟಕ ತಿದ್ದುಪಡಿ ಕಾಯ್ದೆ-2016 ದಿನಾಂಕ:03-03-2018ರಿಂದ ಜಾರಿಯಲ್ಲಿರುತ್ತದೆ.
- ಬಾಲ್ಯವಿವಾಹ ನಿಷೇಧ ನಿಯಾಮಾವಳಿಗಳನ್ನು ಪರಿಷ್ಕರಿಸಿ, ಬಾಲ್ಯ ವಿವಾಹ ನಿಷೇಧ ಕರ್ನಾಟಕ ನಿಯಮಾವಳಿಗಳು-2014ನ್ನು ರಚಿಸಲಾಗಿದೆ.
- ವಿವಿಧ ಇಲಾಖೆಗಳ ಗ್ರಾಮ ಪಂಚಾಯಿತಿ, ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದ 58400 ಅಧಿಕಾರಿ/ ಸಿಬ್ಬಂದಿಗಳನ್ನು ಬಾಲ್ಯವಿವಾಹ ನಿಷೇಧ ಅಧಿಕಾರಿಗಳೆಂದು ನೇಮಕ ಮಾಡಲಾಗಿದೆ.
- ಬಾಲ್ಯವಿವಾಹ ನಿಷೇಧ ಕುರಿತು ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಮನ್ವಯ ಮತ್ತು ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿದೆ. ಗ್ರಾಮ ಪಂಚಾಯಿತಿ, ಮಟ್ಟದಲ್ಲಿ ಮಹಿಳೆಯರ ಮತ್ತು ಮಕ್ಕಳ ಹಕ್ಕುಗಳ ರಕ್ಷಣೆಯ ಕಾವಲು ಸಮಿತಿ ರಚನೆ ಮಾಡಲಾಗಿದೆ.
- ಬಾಲ್ಯವಿವಾಹ ನಿಷೇಧ ಕುರಿತಂತೆ ಅರಿವು ಕಾರ್ಯಕ್ರಮಗಳನ್ನು, ಸಾಮೂಹಿಕ ವಿವಾಹ ಆಯೋಜಕರು, ಪ್ರಜಾರಿಗಳು, ಕಲ್ಯಾಣಮಂಟಪ ವ್ಯವಸ್ಥಾಪಕರು, ಧಾರ್ಮಿಕ ಮುಖಂಡರು, ಬಾಲ್ಯವಿವಾಹ ನಿಷೇಧ ಅಧಿಕಾರಿಗಳು, ನ್ಯಾಯಾಧೀಶರು, ಹಾಸ್ಟೆಲ್ ವಾರ್ಡನ್‌ಗಳು ಪ್ರೌಢಶಾಲಾ ಮುಖ್ಯೋಪಾಧ್ಯಾಯರು, ಪದವಿ ಪೂರ್ವ ಕಾಲೇಜುಗಳ ಕಾರ್ಯಕರ್ತೆಯರು, ಚುನಾಯಿತ ಪ್ರತಿನಿಧಿಗಳಿಗೆ ನಡೆಸಲಾಗಿದೆ.
- ಬಾಲ್ಯವಿವಾಹ ನಿಷೇಧ ಕುರಿತ ಕರಪತ್ರಗಳು, ಬ್ರೋಷರ್ಸ್, ಸ್ಟಿಕ್ಕರ್, ಪೋಸ್ಟರ್ ಗಳು ಮತ್ತು ಸಾಮಾನ್ಯವಾಗಿ ಕೇಳಲಾಗುತ್ತಿರುವ ಪ್ರಶ್ನೆಗಳ ಪುಸ್ತಕ , ಗೋಡೆಬರಹ, ಹೋರ್ಡಿಂಗ್ಸ್ ಪತ್ರಿಕಾ ಜಾಹಿರಾತು, ಕೆ.ಎಸ್.ಆರ್.ಟಿ.ಸಿ. ಬಸ್‌ಗಳ ಮೇಲೆ ನೋಟ್ ಪುಸ್ತಕಗಳು, ಪೋಸ್ಟ್ ಕಾರ್ಡ್ ಮತ್ತು ಎನವಲಪ್‌ಗಳ ಮೇಲೆ ಜಾಹೀರಾತು, ಆಕಾಶವಾಣಿ ಮತ್ತು ದೂರದರ್ಶನ ಕಾರ್ಯಕ್ರಮಗಳು, ಬೀದಿನಾಟಕ, ಕಲಾಜಾಥಾ, ಸೈಕಲ್ ಜಾಥಾ, ಮ್ಯಾರಥಾನ್‌ಗಳ ಮೂಲಕ ಅರಿವು ಮೂಡಿಸಲಾಗಿದೆ.